# ಹೊಸ ಸಹಸ್ರಮಾನದ ನೀತಿ ನಿರೂಪಣಾ ಉಪಕ್ರಮಗಳು

**ಬಿ. ಎಸ್.ರಿಷಿಕೇಶ್**

ಭಾರತದ ಶಿಕ್ಷಣದ ಕಾರ್ಯಕ್ಷೇತ್ರದಲ್ಲಿ ಅರ್ಧ ಶತಮಾನ ಕಾಲ ಕೈಗೂಡದೇ ಇದ್ದ ಬಹಳಷ್ಟು ವಿಷಯಗಳು ಹೊಸ ಸಹಸ್ರಮಾನದ ತಿರುವಿನಲ್ಲಿ ಕೈಗೂಡಿದವು. ದೇಶವು ಹಲವಾರು ನೀತಿ ಉಪಕ್ರಮಗಳ ಅನುಷ್ಠಾನಕ್ಕೆ ಸಾಕ್ಷಿಯಾಯಿತು. ಆದರೆ, ಅವುಗಳ ಹಿಂದೆ ದಶಕಗಳ ಕಾರ್ಯ, ಜನರ ಚಳುವಳಿ ಮತ್ತು ನ್ಯಾಯಾಂಗದ ಕ್ರಿಯಾಶೀಲತೆಗಳ ಹಿನ್ನೆಲೆ ಇದೆ ಎಂಬುದನ್ನು ನಾವು ಗುರುತಿಸಬೇಕು.

ಹೊಸ ಸಹಸ್ರಮಾನದ ನೀತಿ ನಿರೂಪಣಾ ಉಪಕ್ರಮಗಳಾದ, ಸರ್ವಶಿಕ್ಷಣ ಅಭಿಯಾನ (Sarva Shiksha Abhiyan -SSA), ಮಧ್ಯಾಹ್ನದ ಬಿಸಿಯೂಟ ಯೋಜನೆ (Mid-day Meal -MDM)), ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (National Curriculum Frameworks -NCF 2000 & 2005) ಹಾಗೂ ಶಿಕ್ಷಕರ ಶಿಕ್ಷಣದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (Curriculum Framework for Teacher Education -NCFTE 2009), ಇವುಗಳಲ್ಲದೆ ನ್ಯಾಯಮೂರ್ತಿ ವರ್ಮಾ ಆಯೋಗದ ಶಿಫಾರಸಿನಿಂದ ರಚಿತವಾದ ಶಿಕ್ಷಕರ ಶಿಕ್ಷಣದ ಮಾರ್ಗಸೂಚಿ (Teacher Education Guidelines) ಮತ್ತು ಶಿಕ್ಷಣದ ಹಕ್ಕು (Right to Education -RtE) ಭಾರತದ ಶಾಲಾ ಶಿಕ್ಷಣವನ್ನು ಪುನರುಜ್ಜೀವನಗೊಳಿಸಿವೆ. ಭಾರತದ ಶಿಕ್ಷಣ ಕ್ಷೇತ್ರದ ವಿವಿಧ ರಂಗಗಳಲ್ಲಿ ಕ್ರಿಯಾತ್ಮಕ ಚಟುವಟಿಕೆಗಳು ಚಾಲನೆಗೊಳ್ಳಲು ಈ ಹೊಸ ಸಹಸ್ರಮಾನದ ತಿರುವು ನಾಂದಿ ಹಾಡಿತು. ಈ ಕಾಲಘಟ್ಟವು ವಿವಿಧ ಕಾರ್ಯಕ್ರಮ ಮತ್ತು ಯೋಜನೆಗಳು ಕಾರ್ಯರೂಪಕ್ಕೆ ಬರಲು ಸಾಕ್ಷಿಯಾಗಿದ್ದು ಮಾತ್ರವಲ್ಲದೆ ಅದರ ಅನುಷ್ಠಾನಕ್ಕೆ ಪೂರಕವಾದ ಕಾಯಿದೆಗಳ ಬೆಂಬಲ ಕೂಡಾ ಅದಕ್ಕೆ ದೊರಕಿತು. ಹಿಂದಿನ ದಶಕಗಳಲ್ಲಿ ಆಗುತ್ತಿದ್ದಂತೆ ಇವುಗಳು ಕೇವಲ ಕಾಗದದ ಮೇಲಿನ ನೀತಿಯಾಗದೆ ಅಥವಾ ಹಲವು ಕಾರಣಗಳಿಂದ ಅನುಷ್ಠಾನಗೊಳ್ಳದೆ ಹಾಗೆಯೇ ಉಳಿದುಬಿಡಲಿಲ್ಲ, ಅಥವಾ ಕಾರ್ಯರೂಪಕ್ಕೆ ತರುವ ಪ್ರಯತ್ನದಲ್ಲಿ ಎದುರಿಸಬೇಕಾದ ಅಡಚಣೆಗಳಲ್ಲಿ ಅಳಿದುಹೋಗಲಿಲ್ಲ.

ಮೇಲೆ ಚರ್ಚಿಸಿದ ಕಾರ್ಯನೀತಿಗಳು ಹಿಂದಿನ ದಶಕಗಳ ರೀತಿಯಲ್ಲಿ ಇರದೇ, ಕಾರ್ಯತಂತ್ರಗಳ ಜೊತೆ ಹಣಕಾಸು ಸಂಪನ್ಮೂಲಗಳ ವಿಂಗಡಣೆಯನ್ನು ಒಳಗೊಂಡಿತ್ತಲ್ಲದೆ, ಬಹಳಷ್ಟು ಸನ್ನಿವೇಶಗಳಲ್ಲಿ, ಸರ್ಕಾರ ಸರ್ವೋಚ್ಚ ನ್ಯಾಯಾಲಯವು ನೀಡಿದ ನಿರ್ದೇಶನಕ್ಕೆ ಒಳಪಟ್ಟಿತ್ತು. ಅವುಗಳಲ್ಲಿ ಪ್ರತಿಯೊಂದರ ಅನುಷ್ಠಾನವೂ ಸಾಮಾನ್ಯ ವಿಧಾನಗಳಿಗಿಂತ ಬೇರೆಯೇ ಆಗಿತ್ತು. ಏಕೆಂದರೆ, ಅವುಗಳ ಮೂಲಕಲ್ಪನೆಯ ಸಾರವು ಅತಿಯಾಗಿ ತೆಳುವಾಗದಂತೆ ಕಾಪಾಡಿಕೊಳ್ಳಲಾಗಿತ್ತು ಹಾಗೂ ಅವುಗಳು ಅನುಷ್ಠಾನಗೊಳ್ಳುವ ವೇಳೆಗೆ ತಮ್ಮ ಎಲ್ಲ ಅರ್ಥಗಳನ್ನೂ ಕಳೆದುಕೊಳ್ಳುವಷ್ಟು ಕಾಲಹರಣವೂ ಆಗಲಿಲ್ಲ. ಹೊಸ ಸಹಸ್ರಮಾನದ ತಿರುವಿನ ಬಳಿಕ ಕೆಲವು ಸಂಗತಿಗಳು ಕಾರ್ಯರೂಪಕ್ಕೆ ಬಂದ ರೀತಿಯನ್ನು ವಿಮರ್ಶಿಸಲಾಗಲೀ, ಪೂರ್ತಿಯಾಗಿ ವರದಿಮಾಡಲಾಗಲೀ ಈ ಲೇಖನವು ಸಾಲದೇ ಹೋಗಬಹುದು; ಬದಲಾಗಿ, ಇದು, ನೀತಿ ನಿರೂಪಣಾ ಉಪಕ್ರಮಗಳ ಬಗೆಗಿನ ಸಂಕ್ಷಿಪ್ತ ಇತಿಹಾಸ, ಹಿನ್ನೆಲೆಗಳನ್ನು ಪ್ರಸ್ತಾವಿಸುವ ಜೊತೆ-ಜೊತೆಗೆ ನಮ್ಮ ಶಿಕ್ಷಣಕ್ಷೇತ್ರವನ್ನು ಸುಧಾರಿಸಿದ ಕಾರ್ಯನೀತಿಗಳ ಪ್ರಮುಖ

ಅಂಶಗಳನ್ನು ಎತ್ತಿತೋರಿಸುವ ಪ್ರಯತ್ನವಾಗಿದೆ. ಸಹಸ್ರಮಾನದ ತಿರುವಿನವರೆಗೂ ವಿಚಾರಗಳನ್ನು ದಸ್ತಾವೇಜು ರೂಪದಿಂದ ಕಾರ್ಯರೂಪಕ್ಕೆ ತರಲು ತೀವ್ರವಾಗಿ ಹೆಣಗಬೇಕಿದ್ದ ನೀತಿ ನಿರೂಪಣಾ ಉಪಕ್ರಮಗಳು ಅನುಷ್ಠಾನಗೊಳ್ಳಲು ಕಾರಣವಾದ ಅಂಶಗಳನ್ನು ಓದುಗರು ಈ ಲೇಖನದ ಮೂಲಕ ಗುರುತಿಸಲು ಸಾಧ್ಯವಾಗಬಹುದು.

**ಸರ್ವಶಿಕ್ಷಣ ಅಭಿಯಾನ:**

ಶಿಕ್ಷಣ ಹಕ್ಕು ಕಾಯ್ದೆಯ ಜೊತೆಗೆ ಅತ್ಯಂತ ಜನಪ್ರಿಯವಾದ ನೀತಿ ಉಪಕ್ರಮವೆಂದರೆ ಸರ್ವಶಿಕ್ಷಣ ಅಭಿಯಾನ. ಅದರ ಜನಪ್ರಿಯತೆಗೆ ಅದರ ಹೊಸತನವೊಂದೇ ಅಲ್ಲದೇ, ವಿವಿಧ ಕಾರಣಗಳಿವೆ: ನೀತಿ ಉಪಕ್ರಮದ ಪರವಾಗಿ ಹೆಚ್ಚಿನ ಜನಾದೇಶ ಮತ್ತು ಅದರೊಡನೆ ಬಂದ ಭಾರೀ ಪ್ರಮಾಣದ ಹಣಕಾಸು ಸಂಪನ್ಮೂಲ ಸಮಾನಾಂತರ ಆಡಳಿತ ವ್ಯವಸ್ಥೆಯನ್ನೇ ರಚಿಸಲು ಶಕ್ತಿ ನೀಡಿದ್ದಲ್ಲದೆ, ತನ್ಮೂಲಕ ಅದು ಹುಟ್ಟುಹಾಕಿರುವ ಸಾರ್ವತ್ರಿಕ ಪ್ರಭಾವವೂ ಕಾರಣವಾಗಿದೆ. 2001ನೇ ಇಸವಿಯಲ್ಲಿ 'ಸರ್ವಶಿಕ್ಷಣ ಅಭಿಯಾನ'ದ ಕಾರ್ಯಕ್ರಮವನ್ನು ಹಮ್ಮಿಕೊಂಡ ಬಳಿಕ ಇಲ್ಲಿಯವರೆಗೂ ಕೇಂದ್ರ ಸರ್ಕಾರ ಘೋಷಿಸಿರುವ ಪ್ರತಿ ವಾರ್ಷಿಕ ಬಜೆಟ್ಟಿನಲ್ಲಿ ಹತ್ತಾರು ಸಾವಿರ ಕೋಟಿಗಳಷ್ಟು ಹಣವನ್ನು ಇದಕ್ಕಾಗಿ ಮೀಸಲಾಗಿಡಲಾಗಿದೆ. ಇದರ ಹೆಸರೇ ಸೂಚಿಸುವಂತೆ, ಎಲ್ಲರಿಗೂ ಶಿಕ್ಷಣವನ್ನು ತಲುಪಿಸುವುದನ್ನೇ ಗುರಿಯಾಗಿಟ್ಟುಕೊಂಡ ಆಂದೋಲನದ ವಿಧೇಯಕವಾಗಿ ಇದು ಅಂಗೀಕೃತವಾಯಿತು. ಆ ಕಾಲದ ಕೆಲವು ಬಹುಮುಖ್ಯ ಶಿಕ್ಷಣ ಸೂಚಕಗಳ ಬಗ್ಗೆ ಲಭ್ಯವಿರುವ ಮಾಹಿತಿಗಳತ್ತ ಕಣ್ಣು ಹಾಯಿಸಿದರೆ ನಮ್ಮ ಕೆಲವು ಪ್ರಮುಖ ಸೂಚಕಗಳು ಕಳಪೆಯಾಗಿದ್ದುದು ತಿಳಿಯುತ್ತದೆ. ಶಾಲೆಗಳಲ್ಲಿನ ಮಕ್ಕಳ ಸಂಖ್ಯೆ, ಕಚ್ಛಾ ಕಟ್ಟಡ ಮತ್ತು ಶೌಚಾಲಯಗಳಿದ್ದ ಶಾಲೆಗಳ ಸಂಖ್ಯೆ, ಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದ ಶಿಕ್ಷಕರ ಸಂಖ್ಯೆ ಇವೇ ಮೊದಲಾದ ಎಲ್ಲವೂ ನಮ್ಮ ನಿರೀಕ್ಷೆಗೆ ವ್ಯತಿರಿಕ್ತವಾಗಿದ್ದವು.

'ಸರ್ವಶಿಕ್ಷಣ ಅಭಿಯಾನ'ದ ಮುಖ್ಯ ಗಮನವು ದಾಖಲಾತಿಯ ಕಡೆಗೆ, ಅದರ ಪ್ರಾಥಮಿಕ ಗುರಿಯು ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ (universalisation of elementary education -UEE) ಕಡೆಗೆ ಇದ್ದರೂ, ಕಳಪೆ ದಾಖಲಾತಿಗೆ ಮೂಲ ಕಾರಣಗಳಾದ ಮೂಲಸೌಕರ್ಯಗಳು, ಶಿಕ್ಷಕರು ಹಾಗೂ ಇತರೆ ಸಂಪನ್ಮೂಲಗಳಾದ ಸಮವಸ್ತ್ರ, ಪಠ್ಯಪುಸ್ತಕ ಮತ್ತು ವಿದ್ಯಾರ್ಥಿವೇತನ ಮೊದಲಾದವುಗಳ ಕೊರತೆಯನ್ನು ಸುಧಾರಿಸುವ ದಿಕ್ಕಿನಲ್ಲಿ ಈ ಅಭಿಯಾನವು ಕೆಲಸ ಮಾಡಿದ್ದು ಸತ್ಯ. ನಿಜ ಹೇಳಬೇಕೆಂದರೆ, ನಿರ್ದಿಷ್ಟವಾಗಿ ಹೆಣ್ಣುಮಕ್ಕಳಿಗಾಗಿಯೇ ತರಗತಿ ಕೊಠಡಿಗಳು ಮತ್ತು ಶೌಚಾಲಯಗಳನ್ನು ಕಟ್ಟುವ ಕಡೆ ಇದು ಗಮನಹರಿಸಿದ್ದು, ವಿಶೇಷವಾಗಿ ಹೆಣ್ಣುಮಕ್ಕಳ ದಾಖಲಾತಿಯ ವಿಚಾರದಲ್ಲಿ ಗಮನಾರ್ಹ ಪ್ರಭಾವ ಬೀರಿತು. ಕಳೆದ ದಶಕದ ಕೊನೆಗೆ, ಕ್ರಮೇಣ ಇಳಿಮುಖವಾಯಿತಾದರೂ, ಕಂಡುಬಂದ ದಾಖಲಾತಿಯ ಬೆಳವಣಿಗೆಯು ಈ ಅಂಶದ ಮೇಲೆ ಸರ್ವಶಿಕ್ಷಣ ಅಭಿಯಾನವು ಬೀರಿದ ಕ್ಷಿಪ್ರವಾದ ಹಾಗೂ ಪ್ರಬಲ ಪರಿಣಾಮವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ನಿಜ ಸಂಗತಿ ಏನೆಂದರೆ, ಈ ಕಾರ್ಯಕ್ರಮವನ್ನು ವಿಸ್ತರಿಸಬೇಕೆಂಬ ನಿರ್ಧಾರವನ್ನು ಕೈಗೊಳ್ಳುವ ಮೊದಲು 'ಸರ್ವಶಿಕ್ಷಣ ಅಭಿಯಾನ'ವು ಕಳೆದ ದಶಕದೊಂದಿಗೇ ಮುಕ್ತಾಯವಾಗಬೇಕಿತ್ತು. 'ಸರ್ವಶಿಕ್ಷಣ ಅಭಿಯಾನ'ದ ಪ್ರಾರಂಭದಿಂದ

ಹಿಡಿದು 2014ರವರೆಗೂ ಹೆಣ್ಣುಮಕ್ಕಳ ಒಟ್ಟಾರೆ ದಾಖಲಾತಿಯು ಶೇಕಡಾ 25ಕ್ಕಿಂತಲೂ ಹೆಚ್ಚಿನ ಏರಿಕೆಯನ್ನು ಕಂಡಿತು. ಮೂಲಸೌಕರ್ಯಗಳನ್ನು ಒದಗಿಸಿದ್ದು ಕೂಡ ಈ ಸುಧಾರಣೆಗೆ ಕಾರಣವಾಗಿದ್ದು ನಿಜ; 2001–02ರಲ್ಲಿ, 'ಸರ್ವಶಿಕ್ಷಣ ಅಭಿಯಾನ' ಆರಂಭಗೊಂಡಾಗ, ದೇಶದ 1,73,757 ಜನವಸತಿಗಳಲ್ಲಿ ಪ್ರಾಥಮಿಕ ಶಾಲೆಗಳಿರಲಿಲ್ಲ. ಆದರೆ, ಅಭಿಯಾನ ಆರಂಭವಾಗಿ ಕೆಲ ವರ್ಷಗಳಲ್ಲೇ 2,04,686 ಪ್ರಾಥಮಿಕ ಶಾಲೆಗಳನ್ನು ಮಂಜೂರು ಮಾಡಲಾಯಿತು. ಆದರೂ, 2014–15ರಲ್ಲಿ 347 ಶಾಲೆಗಳನ್ನು ಮಂಜೂರು ಮಾಡಲಾಗಿದೆ ಎಂಬ ವಾಸ್ತವಿಕ ಸತ್ಯವು ಒಂದೂವರೆ ದಶಕದ ನಂತರವೂ ಕೊರತೆಗಳು ಇನ್ನೂ ಅಸ್ತಿತ್ವದಲ್ಲಿ ಇವೆ ಎಂಬುದನ್ನು ಸೂಚಿಸುತ್ತದೆ. ಆದರೆ, ದೇಶವು ಸಹಸ್ರಮಾನದ ತಿರುವಿನಲ್ಲಿ ಎಂತಹ ಕೊರತೆಯನ್ನು ಎದುರಿಸುತ್ತಿತ್ತು ಎಂಬುದನ್ನು ಗುರುತಿಸಲು ದಿಗ್ಭ್ರಮೆಗೊಳಿಸುವ ಈ ಅಂಕಿ–ಅಂಶಗಳು ಸಹಾಯಮಾಡುತ್ತವೆ. 2002ನೇ ಇಸವಿಯಲ್ಲಿ 2,30,941 ಜನವಸತಿಗಳಲ್ಲಿ ಹಿರಿಯ ಪ್ರಾಥಮಿಕ ಶಾಲೆಗಳು ಇರಲಿಲ್ಲ ಎಂಬುದು ಗಮನಾರ್ಹ ಸಂಗತಿ. ವರ್ಷಗಳು ಕಳೆದಂತೆ ಪ್ರತಿ ಮೂರು ಕಿಲೋಮೀಟರ್ ಸುತ್ತಲಿನ ವ್ಯಾಪ್ತಿಗೆ ಒಂದರಂತೆ, 1,59,427 ಹಿರಿಯ ಪ್ರಾಥಮಿಕ ಶಾಲೆಗಳನ್ನು ಮಂಜೂರು ಮಾಡಲಾಗಿದೆ.

ಶಿಕ್ಷಣಕ್ಷೇತ್ರದಲ್ಲಿರುವ ಲಿಂಗ ಸಂಬಂಧಿತ ಹಾಗೂ ಸಾಮಾಜಿಕ ಅಂತರವನ್ನು ಇಲ್ಲವಾಗಿಸುವುದರ ಜೊತೆಗೆ ಸಾರ್ವತ್ರಿಕ ಪ್ರವೇಶಾವಕಾಶ ಕಲ್ಪಿಸುವುದು, ಕಲಿಕೆಯ ಗುಣಮಟ್ಟವನ್ನು ಕಾಯ್ದುಕೊಳ್ಳುವುದು ಹಾಗೂ ಸುಧಾರಿಸುವುದು ಇವು ಸರ್ವಶಿಕ್ಷಣ ಅಭಿಯಾನದ ಮೂಲ ಗುರಿಗಳಾಗಿದ್ದು, ಇವುಗಳ ಸಲುವಾಗಿ ಅನೇಕಾನೇಕ ಕಾರ್ಯಕ್ರಮಗಳು ಆಯೋಜಿತಗೊಂಡು ಕಾರ್ಯರೂಪಕ್ಕೆ ಬಂದವು. ಈ ನೀತಿ ಉಪಕ್ರಮವನ್ನು ವಿಶ್ವ ಬ್ಯಾಂಕ್, ಡಿಎಫ್ಐಡಿ ಹಾಗೂ ಯುನಿಸೆಫ್‌ಗಳು ಬೆಂಬಲಿಸಿವೆ. ಸರ್ಕಾರದ ಆಡಳಿತ ವ್ಯವಸ್ಥೆಯೂ ಇದರ ಜೊತೆಗೂಡಿ ನಮ್ಮ ಶಿಕ್ಷಣವ್ಯವಸ್ಥೆಯನ್ನು ಕಾಡುತ್ತಿರುವ ಕೆಲವು ಮೂಲ ಸಮಸ್ಯೆಗಳನ್ನು ಪತ್ತೆಮಾಡುವ ನಿಟ್ಟಿನಲ್ಲಿ ಪ್ರಚಂಡ ಶ್ರಮವನ್ನು ಕೈಗೊಳ್ಳಲು ಈ ಬೆಂಬಲ ಸಹಾಯಕವಾಗಿದೆ. ಶೌಚಾಲಯದ ವಿಷಯದಲ್ಲಿ ಕೂಡ, ಈಗಲೂ ಸರಿಸುಮಾರು 2 ಲಕ್ಷ ಶಾಲೆಗಳು ಶೌಚಾಲಯವಿಲ್ಲದೆ ಕಾರ್ಯ ನಿರ್ವಹಿಸುತ್ತಿದ್ದರೂ, 'ಸರ್ವಶಿಕ್ಷಣ ಅಭಿಯಾನ'ದ ವತಿಯಿಂದ ಸರಿಸುಮಾರು 10 ಲಕ್ಷ ಶೌಚಾಲಯಗಳನ್ನು ಮಂಜೂರು ಮಾಡಲಾಯಿತು (ಈ ಕಾರ್ಯಕ್ರಮದ ಮಧ್ಯಭಾಗವಾದ 2006ರಲ್ಲಿ ಕೇವಲ ಶೇಕಡಾ 60ರಷ್ಟು ಶಾಲೆಗಳಲ್ಲಿ ಶೌಚಾಲಯಗಳಿದ್ದರೆ, ಕಾರ್ಯಕ್ರಮದ ಆರಂಭದ ಅಂಕಿ–ಅಂಶವು ಶೇಕಡಾ 20ಕ್ಕಿಂತಲೂ ಕಡಿಮೆ ಇತ್ತೆಂದು ಇಲ್ಲಿ ತೋರಿಸಲಾದ ಕೋಷ್ಟಕವುಹೇಳುತ್ತದೆ). ಹಲವಾರು ಸಂಶೋಧನೆಗಳು ಸೂಚಿಸಿರುವ ಪ್ರಕಾರ ಹೆಣ್ಣುಮಕ್ಕಳು ಶಾಲೆಯನ್ನು ತೊರೆಯದಂತೆ ನೋಡಿಕೊಳ್ಳಲು ಇದು ಕಾರಣವಾಗಿದೆ ಎಂದು ಹೇಳಬಹುದು. 'ಸರ್ವಶಿಕ್ಷಣ ಅಭಿಯಾನ'ದ ಪರಿಣಾಮವನ್ನು ಪರಿಗಣಿಸುವುದೇ ಆದರೆ, ಅದು ನಮ್ಮ ಶಾಲೆಗಳಲ್ಲಿ ಮೂಲಸೌಕರ್ಯಗಳು ದೊರೆಯಲು ಪ್ರಚಂಡ ಪ್ರೋತ್ಸಾಹ ನೀಡಿದೆ. ಈ ಪ್ರೋತ್ಸಾಹದಿಂದ ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರ ವಿಷಯದಲ್ಲೂ ದಾಖಲಾತಿಯು ಶೇಕಡಾ ನೂರಕ್ಕೂ ಮೀರಿ ಏರಿಕೆ ಕಂಡಿದೆ. ಕಲಿಕಾ ಸೂಚಕಗಳ ವಿಚಾರದಲ್ಲಿ ಇನ್ನೂ ಬಹಳಷ್ಟು ಕೊರತೆಗಳು ಕಾಡುತ್ತಿವೆಯಾದರೂ, ಅದಕ್ಕಾಗಿ ಬೇರೆ, ಹೆಚ್ಚು ಮೂಲಭೂತವಾದ ನೀತಿ ಉಪಕ್ರಮಗಳ ಮಟ್ಟದ ಕ್ರಿಯಾಶೀಲತೆಯ ಅಗತ್ಯ ಇದೆ. ಉದಾಹರಣೆಗೆ: ಶಿಕ್ಷಕರ ಶಿಕ್ಷಣದಲ್ಲಿ ಸುಧಾರಣೆ. ಇವು ಆರಂಭಗೊಂಡಿದ್ದರೂ, ಈ ಕ್ಷೇತ್ರಗಳಲ್ಲಿ ಇನ್ನೂ ಬಹಳಷ್ಟು ಆಗಬೇಕಿದೆ. ಕಳೆದ ದಶಕದ ಕೊನೆಯಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ 'ಸರ್ವಶಿಕ್ಷಣ ಅಭಿಯಾನ'ವು ಏನನ್ನು ಸಾಧಿಸಿತೋ ಅದನ್ನು ಪ್ರೌಢಶಾಲಾ ಶಿಕ್ಷಣದಲ್ಲಿ ಸಾಧಿಸುವ ಗುರಿ ಹೊಂದಿರುವ ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಆಂದೋಲನದ (Rashtriya Madhyamik Shiksha Andolan -

RMSA) ಕಡೆಗೆ ಗಮನವು ವರ್ಗಾವಣೆಯಾಗಿದೆಯಾದರೂ, ಸರ್ವಶಿಕ್ಷಣ ಅಭಿಯಾನ ಕಾರ್ಯಕ್ರಮದ ಹಿಂದಿರುವ ನೀತಿ ಉಪಕ್ರಮದ ತತ್ವಗಳು ದೀರ್ಘಕಾಲಿಕ ಗುಣಮಟ್ಟದ ಹೆಚ್ಚಳವನ್ನು ಗುರಿಯಾಗಿ ಇಟ್ಟುಕೊಂಡಿರುವುದರಿಂದ ಅದರ ಕಾರ್ಯಾಚರಣೆ ಮುಂದುವರಿಯುತ್ತಿದೆ.

**ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮ**

ಇದರ ತರುವಾಯ 'ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮ'ವು ಹೊಸ ಸಹಸ್ರಮಾನವು ಕಂಡ ಭಾರೀ ನೀತಿ ನಿರೂಪಣಾ ಉಪಕ್ರಮವಾಗಿತ್ತು. ಬಜೆಟ್ಟಿನ ಹಣ ಮಂಜೂರಾತಿಗಳಲ್ಲಿ ಈ ಕಾರ್ಯಕ್ರಮಕ್ಕೆ ಉತ್ತಮ ಅನುದಾನ ನೀಡಿರುವುದನ್ನು ನಾವು ಗಮನಿಸಬಹುದು. ಹಾಗೂ, ಹೆಚ್ಚಿನ ರಾಜ್ಯಗಳಲ್ಲಿ ಶಿಕ್ಷಕರ ವೇತನದ ನಂತರ 'ಬಿಸಿಯೂಟ'ಕ್ಕಾಗಿಯೇ ಅತಿ ಹೆಚ್ಚು ಹಣ ಮಂಜೂರು ಮಾಡಲಾಗುತ್ತಿದೆ. ಬಿಸಿಯೂಟದ ಕಾರ್ಯಕ್ರಮವನ್ನು ಮೊಟ್ಟಮೊದಲಿಗೆ 1920ರಲ್ಲೇ ಅಂದಿನ ಮದ್ರಾಸ್ (ಈಗಿನ ಚೆನ್ನೈ) ಕಾರ್ಪೊರೇಷನ್‌ನಲ್ಲಿ, ನಂತರ ಕೋಲ್ಕತ್ತಾದಲ್ಲಿ ಹಾಗೂ 1950ರ ದಶಕದ ಮಧ್ಯಭಾಗದಲ್ಲಿ ಹಲವು ರಾಜ್ಯಗಳಲ್ಲಿ ಆಚರಣೆಗೆ ತಂದರೂ, ದೇಶಾದ್ಯಂತ ಆಯ್ದ ವಿಭಾಗಗಳಲ್ಲಿ ಭಾರೀ ಪ್ರಮಾಣದ ಪೌಷ್ಟಿಕ ಆಹಾರದ ಕಾರ್ಯಕ್ರಮವಾಗಿ ಇದು ಹೊರಹೊಮ್ಮಿದ್ದು 90ರ ದಶಕದ ಮಧ್ಯಭಾಗದಲ್ಲಿ ಮಾತ್ರ. ಪ್ರಾಥಮಿಕ ಶಿಕ್ಷಣಕ್ಕೆ ಪೌಷ್ಟಿಕಾಹಾರದ ನೆರವಿನ ರಾಷ್ಟ್ರೀಯ ಕಾರ್ಯಕ್ರಮ (National Programme of Nutritional Support to Primary Education - NPNSPE)ವನ್ನು ಎಲ್ಲ ವಿಭಾಗಗಳಿಗೆ ಬೇಗ ವಿಸ್ತರಿಸಲಾಯಿತು. ಇಷ್ಟಾದರೂ, 2001ರ ನವೆಂಬರಿನಲ್ಲಿ ಜಾರಿಯಾದ ಸುಪ್ರೀಂ ಕೋರ್ಟಿನ ಮಧ್ಯಂತರ ಆದೇಶವು ಕೊನೆಗೂ 'ಬಿಸಿಯೂಟ ಕಾರ್ಯಕ್ರಮ'ವು (ಈಗಿನ ಬಿಸಿಯೂಟ, MDM) ಸ್ಥಾಪನೆಗೊಳ್ಳಲು ಕಾರಣವಾಯಿತು. ಎಂಟು ಆಹಾರ ಭದ್ರತಾ ಯೋಜನೆಗಳನ್ನು ಬಡವರ ಹಕ್ಕುಗಳಾಗಿ ಪರಿವರ್ತಿಸುವಲ್ಲಿ ಸುಪ್ರೀಂ ಕೋರ್ಟ್‌ನ ಮಧ್ಯಂತರ ಆದೇಶವು ಮುಖ್ಯಪಾತ್ರ ವಹಿಸಿತು. ಅಂತ್ಯೋದಯ ಅನ್ನ ಯೋಜನೆ, ರಾಷ್ಟ್ರೀಯ ವೃದ್ಧಾಪ್ಯ ಪಿಂಚಣಿ ಯೋಜನೆ, ಸಮಗ್ರ ಮಕ್ಕಳ ಅಭಿವೃದ್ಧಿ ಸೇವೆಗಳು (Integrated Child Development Services -ICDS), ಅನ್ನಪೂರ್ಣ ಯೋಜನೆ, ಕೆಲಸಕ್ಕೆ ಆಹಾರ ನೀಡುವಂತಹ ಹಲವಾರು ಉದ್ಯೋಗ ಯೋಜನೆಗಳು ಹಾಗೂ ರಾಷ್ಟ್ರೀಯ ಬಿಸಿಯೂಟ ಕಾರ್ಯಕ್ರಮಗಳು ಇವುಗಳಲ್ಲಿ ಕೆಲವಾಗಿದ್ದವು. ಆದೇಶದ ಪ್ರಕಾರ ಕಾರ್ಯಕ್ರಮದ ಅನುಷ್ಠಾನವನ್ನು ನೋಡಿಕೊಳ್ಳಲು ಮೇ 2002ರಲ್ಲಿ ನ್ಯಾಯಾಲಯವು ಎರಡು ಆಯೋಗಗಳನ್ನು ನೇಮಿಸಿದ್ದರೂ, ಹಲವು ರಾಜ್ಯಗಳಲ್ಲಿ ಹಣದ ಅಭಾವದಿಂದಾಗಿ ಕಾರ್ಯಕ್ರಮವು ಜಾರಿಗೊಳ್ಳಲೇ ಇಲ್ಲ. ಇದೇ ಸಮಯದಲ್ಲಿ, ಅಂದರೆ 2003ರಲ್ಲಿ, ಯೋಜನಾ ಆಯೋಗವು ಈ ಪರಿಸ್ಥಿತಿಯನ್ನು ಸುಧಾರಿಸಲು ಕನಿಷ್ಠ ಶೇ. 15ರಷ್ಟು ಹಣವನ್ನು ಬೇರೊಂದು ಯೋಜನೆಯಿಂದ ಮಂಜೂರು ಮಾಡಬೇಕು ಎಂದು ಸಲಹೆ ನೀಡಿತು. ಕೊನೆಗೂ, 2004ರಲ್ಲಿ ಕೇಂದ್ರ ಸರ್ಕಾರವು ಎಲ್ಲ ರಾಜ್ಯಗಳಿಗೆ ಸಾಕಷ್ಟು ಹಣವನ್ನು ನೀಡುವ ಭರವಸೆ ಕೊಟ್ಟಿತು. ಇದು ಸುಮಾರು 10 ಲಕ್ಷ ಶಾಲೆಗಳಲ್ಲಿ ಚಾಲ್ತಿಯಲ್ಲಿರುವ, ಪ್ರಪಂಚದಲ್ಲೇ ಅತಿ ದೊಡ್ಡ ಆಹಾರ ಒದಗಿಸುವ ಕಾರ್ಯಕ್ರಮಕ್ಕೆ ಎಡೆ ಮಾಡಿಕೊಟ್ಟಿದ್ದೇ ಅಲ್ಲದೆ, ಹತ್ತು ಕೋಟಿಗೂ ಅಧಿಕ ಮಕ್ಕಳಿಗೆ ಆಹಾರ ಒದಗಿಸುವುದನ್ನು ಇಲ್ಲಿಯವರೆಗೂ, ಅಂದರೆ, ಒಂದು ದಶಕಕ್ಕೂ ಹೆಚ್ಚು ಕಾಲದಿಂದ ನಡೆಸಿಕೊಂಡು ಬಂದಿದೆ!

ಮಕ್ಕಳ ದಾಖಲಾತಿ ಹಾಗೂ ಮಕ್ಕಳನ್ನು ಶಾಲೆಯಲ್ಲಿ ಉಳಿಸಿಕೊಳ್ಳುವ ವಿಚಾರದ ಜೊತೆಗೆ ಮಕ್ಕಳ ಆಹಾರದ ಪೌಷ್ಟಿಕತೆಯನ್ನು ಸುಧಾರಿಸುವ ವಿಚಾರದ ಬಗ್ಗೆ ಮತ್ತೆ ಗಮನ ಹರಿಸಿರುವ ಈ ಕಾರ್ಯಕ್ರಮವು ಅನೇಕ ಉದ್ದೇಶಗಳನ್ನು ಒಳಗೊಂಡಿತ್ತು. ಇಷ್ಟೇ ಅಲ್ಲದೆ, ಶಿಕ್ಷಣನೀತಿಯ ಗುರಿಗಳಾದ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದೊಂದಿಗೆ ಇದು ಗಾಢವಾದ ಸಂಬಂಧ ಹೊಂದಿದೆ. ಮೇಲೆ ಹೇಳಿರುವ ಉದ್ದೇಶಗಳನ್ನು ಈಡೇರಿಸುವತ್ತ ಮಧ್ಯಾಹ್ನದ ಬಿಸಿಯೂಟಕಾರ್ಯಕ್ರಮವು ಪ್ರಚಂಡ ಪ್ರಭಾವ ಬೀರಿರುವುದನ್ನು ಸಂಶೋಧನಾ ಅಧ್ಯಯನಗಳು ಸ್ಪಷ್ಟವಾಗಿ ತೋರಿಸುತ್ತವೆ. ಇದು ದಾಖಲಾತಿಯಲ್ಲಷ್ಟೇ ಹೆಚ್ಚಳ ತರಲಿಲ್ಲ, ಹಾಜರಾತಿಯನ್ನು ಸುಧಾರಿಸಿತು ಕೂಡ. ಈ ಬಗೆಗಿನ ಅಧ್ಯಯನಗಳು ಬಿಸಿಯೂಟಕ್ಕೂ ಮಕ್ಕಳ ಆರೋಗ್ಯಕ್ಕೂ ಇರುವ ಸುವ್ಯಕ್ತ ಸಕಾರಾತ್ಮಕ ಸಂಬಂಧಗಳನ್ನೂ ಮೀರಿ ಬಿಸಿಯೂಟಕ್ಕೂ ಕಲಿಕಾ-ಫಲಿತಗಳಿಗೂ ಇರುವ ಸಕಾರಾತ್ಮಕ ಸಂಬಂಧವನ್ನು ಕೂಡ ಸೂಚಿಸಿವೆ. ಆದರೆ, ನಮ್ಮ ದೇಶದ ಹಲವು ಮಕ್ಕಳಿಗೆ ಶಾಲೆಯ ಬಿಸಿಯೂಟವೇ ದಿನದ ಏಕೈಕ ಊಟವಾಗಿದೆ ಎಂಬುದು ಕೊಂಚ ನೋವನ್ನುಂಟು ಮಾಡುವ ವಿಚಾರವಾಗಿದೆ.

**ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (ರಾ.ಪ.ಚೌ.)**

2005ರಲ್ಲಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟನ್ನು (National Curriculum Framework -NCF) ಬಿಡುಗಡೆ ಮಾಡಲಾಯಿತು. ಆಗಲೇ ಇದ್ದ ಹಿಂದಿನ ರಾ.ಪ.ಚೌ.—2000ವನ್ನು ಪರಿಷ್ಕರಿಸಿ, ಉತ್ತಮಗೊಳಿಸಲಾಯಿತು. ಇದು ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವ ಕಡೆಗೆ ಮತ್ತೊಂದು ಪ್ರಮುಖ ಹೆಜ್ಜೆಯಾಯಿತು. ಇದು ಒಂದು ಚೌಕಟ್ಟು ಮಾತ್ರವಾಗಿತ್ತಾದರೂ, ಪಠ್ಯದಿಂದ ಸಹ-ಪಠ್ಯದವರೆಗೆ ಪ್ರತಿ ಅಂಶದ ವಿಚಾರದಲ್ಲೂ ಅದು ಶಿಕ್ಷಣದೊಂದಿಗೆ ಸಂಪರ್ಕ ಹೊಂದಿತ್ತು. ರಾ.ಪ.ಚೌ. 2005ಕ್ಕೆ ಒಳಸುರಿಗಳನ್ನು (input) ಕೊಡಲು ಇಪ್ಪತ್ತೊಂದು ಕೇಂದ್ರ ಗುಂಪುಗಳಿಂದ ಬಂದ ಇಪ್ಪತ್ತೊಂದು ಧೋರಣಾಪತ್ರ (position papers)ಗಳಿದ್ದವು. ಅದು ಕಲೆ ಆಗಿರಲಿ ಅಥವಾ ಗಣಿತವೇ ಆಗಿರಲಿ, ಶಿಕ್ಷಣದ ವಿಚಾರವಾಗಿ ಏನೇನು ಕೆಲಸಗಳು ಆಗಬೇಕು ಎಂಬುದರ ಬಗ್ಗೆ ಪ್ರತಿಯೊಂದು ಪತ್ರಿಕೆಯಲ್ಲೂ ಸಂಕ್ಷಿಪ್ತ ಮಾಹಿತಿ ಇತ್ತು. ಹಲವಾರು ವರ್ಷಗಳ ನೀತಿ ನಿರೂಪಣೆಯ ನೆಲೆಗಳಿಂದ ಇವು ರೂಪುಗೊಂಡು ಅಸ್ತಿತ್ವಕ್ಕೆ ಬಂದವು. ಇದರಿಂದ ಒಂದು ದಸ್ತಾವೇಜು ಹೊರಹೊಮ್ಮಿ ತತ್ವಗಳನ್ನು ಕಾರ್ಯರೂಪಕ್ಕಿಳಿಸುವ ದಿಕ್ಕಿನಲ್ಲಿ ಹೆಜ್ಜೆಯಿಟ್ಟು ಸೂಕ್ತ ಪಠ್ಯಕ್ರಮಗಳ ರಚನೆಗೆ ಅನುವು ಮಾಡಿಕೊಟ್ಟಿತು. ತರಗತಿಗಳಲ್ಲಿ ಪಠ್ಯಕ್ರಮದ ಮೂಲಕ ಏನನ್ನು ಮಗುವಿಗೆ ತಲುಪಿಸಲಾಗುತ್ತದೆ ಎಂಬುದಕ್ಕೂ, ಶಿಕ್ಷಣನೀತಿ ಹೇಳುವ ವಿಚಾರಗಳಿಗೂ ರಾ.ಪ.ಚೌ. ಸಂಪರ್ಕಸೇತುವಾಗಿತ್ತು ಎಂಬುದಂತೂ ನಿಜ. ರಾ.ಪ.ಚೌ. 2005 ಬರುವವರೆಗೂ, ಶಿಕ್ಷಣನೀತಿಯ ದಸ್ತಾವೇಜುಗಳಲ್ಲಿ ಎತ್ತಿಹಿಡಿದ ಧ್ಯೇಯಗಳಿಗೂ, ರೂಪಿಸಲಾಗುತ್ತಿದ್ದ ಪಠ್ಯಕ್ರಮಗಳಿಗೂ ಹೊಂದಾಣಿಕೆಯೇ ಇರಲಿಲ್ಲ. ಆದಾಗ್ಯೂ ರಾ.ಪ.ಚೌ. ಕೇಂದ್ರೀಯ ಪಠ್ಯಕ್ರಮಗಳನ್ನು ರಚಿಸಲು ಸಹಾಯ ಮಾಡಿದ್ದೇ ಅಲ್ಲದೆ, ಮಕ್ಕಳು ಇಷ್ಟಪಡುವ ಹಾಗೂ ಶಿಕ್ಷಣವನ್ನು ಸಮಗ್ರ ದೃಷ್ಟಿಯಿಂದ ನೋಡುವ ಪ್ರಸ್ತಾವಗಳಂತಹ ಮೂಲ ವಿಚಾರಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು.

ರಾ.ಪ.ಚೌ.-2005ರ ಪ್ರಮುಖ ಪರಿಕಲ್ಪನೆಗಳು, ನಮ್ಮ ಹಿಂದಿನ ನೀತಿ ನಿರೂಪಣೆಗಳಲ್ಲಿ ವ್ಯಕ್ತವಾಗಿರುವ ವಿಮರ್ಶಾತ್ಮಕ ಶೈಕ್ಷಣಿಕ ವಿಚಾರಗಳ ಆಧಾರದ ಮೇಲೆ ರಚಿತವಾಗಿವೆ. ಈ ದಸ್ತಾವೇಜು 5 ಭಾಗಗಳನ್ನು

ಒಳಗೊಂಡಿದ್ದು, ಅವುಗಳಲ್ಲಿ ಪ್ರತಿಯೊಂದೂ ಇನ್ನೊಂದಕ್ಕಿಂತ ಪ್ರಮುಖವಾಗಿದೆ. 'ಪಠ್ಯಕ್ರಮ ಚೌಕಟ್ಟಿನ ಪರಿಕಲ್ಪನೆ'ಗಳಿಂದ ಆರಂಭಿಸಿ ಮನುಷ್ಯರ 'ಕಲಿಕೆ ಮತ್ತು ಜ್ಞಾನಸಂಪಾದನೆ'ಯ ಹಿಂದಿರುವ ವಿಚಾರಗಳ ಮೇಲೆ ಗಮನ ಹರಿಸುತ್ತಾ, ಮೂರನೆಯ ಭಾಗದಲ್ಲಿ 'ಶಾಲೆಯ ಹಂತಗಳು, ಪಠ್ಯಕ್ರಮದ ಹರಹು ಹಾಗೂ ಮೌಲ್ಯಮಾಪನ'ಗಳನ್ನು ಆಳವಾಗಿ ಶೋಧಿಸುವುದೇ ಅಲ್ಲದೆ, ಕೊನೆಯಲ್ಲಿ 'ಶಾಲೆ ಮತ್ತು ತರಗತಿಯ ವಾತಾವರಣ'ದ ಬಗ್ಗೆ ಗಮನವನ್ನು ಕೇಂದ್ರೀಕರಿಸಿ' ವ್ಯವಸ್ಥೆಗೆ ಸಂಬಂಧಿಸಿದ ಸುಧಾರಣೆ'ಗಳ ಬಗ್ಗೆ ತಿಳಿಸಿ ಈ ದಸ್ತಾವೇಜು ಮುಕ್ತಾಯಗೊಳ್ಳುತ್ತದೆ.

* ಕಲಿಕೆಯು ಕಂಠಪಾಠದ ಪದ್ಧತಿಯಿಂದ ದೂರಸರಿಯುವಂತೆ ಮಾಡುವುದು.

* ಮಕ್ಕಳ ಸಮಗ್ರ ಬೆಳವಣಿಗೆಯ ಬಗ್ಗೆ ಭರವಸೆ ನೀಡುವುದು.

*ಪರೀಕ್ಷೆಯನ್ನು ತರಗತಿಯ ಕಲಿಕೆಯೊಂದಿಗೆ ಸಂಯೋಜಿಸುವುದು ಹಾಗೂ ಪರೀಕ್ಷೆಗಳನ್ನು ಹೆಚ್ಚು ನಮ್ಯವನ್ನಾಗಿ ಮಾಡುವುದು.

*ಭಾರತದ ಪ್ರಜಾತಾಂತ್ರಿಕ ನೀತಿಯೊಳಗಿನ ಕಾಳಜಿ, ಮನೋಧರ್ಮವನ್ನು ಗುರುತಿಸಿ ಪೋಷಿಸುವುದು.

ದೇಶದ ಪ್ರಜಾತಾಂತ್ರಿಕ ರಾಜಕೀಯ ವ್ಯವಸ್ಥೆಯ ಒಳಗಿನ ಕಾಳಜಿ ಮನೋಧರ್ಮದ ಬೆಳಕಿನಲ್ಲಿ ಮಹತ್ತಾದ ಅಸ್ಮಿತೆಯನ್ನು ಪೋಷಿಸಿ ಬೆಳೆಸುವುದು.

ರಾ.ಪ.ಚೌ. ಎಲ್ಲ ಶಾಲೆಗಳಿಗೂ ಅನ್ವಯಿಸಿದರೂ, ಹೆಚ್ಚಿನ ಶಾಲೆಗಳು ರಾಜ್ಯ ಮಂಡಳಿಯದ್ದಾಗಿರುವ ಕಾರಣದಿಂದಾಗಿ ಕೇವಲ ಕೆಲವು ರಾಜ್ಯಗಳು ರಾ.ಪ.ಚೌ.ದ ಮಾದರಿಯನ್ನು ಅಳವಡಿಸಿಕೊಂಡವು. ನಿಜವಾಗಿ ಹೇಳಬೇಕೆಂದರೆ, ಕೆಲವೇ ಕೆಲವು ರಾಜ್ಯಗಳು ಮಾತ್ರ ಸೂಕ್ತ ಪಠ್ಯಕ್ರಮಗಳನ್ನು ರಚಿಸಲು ಉಪಯೋಗಿಸಿಕೊಳ್ಳಬಹುದಾದ ತಮ್ಮದೇ ಆದ ಚೌಕಟ್ಟುಗಳನ್ನು ರಚಿಸಿಕೊಂಡವು. ಆದರೆ ರಾಜ್ಯಗಳು ತಮ್ಮ ಪಠ್ಯಕ್ರಮ ಚೌಕಟ್ಟನ್ನು ರಾ.ಪ.ಚೌ. ಆಧಾರದ ಮೇಲೆ ರಚಿಸಬೇಕೆಂದು 'ಶಿಕ್ಷಣ ಹಕ್ಕು ಕಾಯ್ದೆ'ಯು (RTE) ಆಗ್ರಹಿಸಿದ ಬಳಿಕ ಇದೆಲ್ಲವೂ ಬದಲಾಗಿದೆ. ಸರ್ಕಾರದ ವಿವಿಧ ನೀತಿಗಳು ಹಾಗೂ ಉಪಕ್ರಮಗಳ ನಡುವೆ ಇರುವ ಪರಸ್ಪರ ಸಂಬಂಧದ ಸ್ವರೂಪ ಏನು ಎಂಬುದನ್ನು ಈ ವಿದ್ಯಮಾನವು ಸುಂದರವಾಗಿ ತಿಳಿಸಿಕೊಡುತ್ತದೆ.

**ಶಿಕ್ಷಣ ಹಕ್ಕು ಕಾಯ್ದೆ (ಆರ್.ಟಿ.ಇ.)**

ನಮ್ಮ ದೇಶದ ಶಿಕ್ಷಣ ಕ್ಷೇತ್ರದಲ್ಲಿ ಇಲ್ಲಿಯವರೆಗೆ ಅನುಷ್ಠಾನಗೊಂಡ ಉಪಕ್ರಮಗಳಲ್ಲಿ ಯಾವುದೂ 'ಆರ್.ಟಿ.ಇ.(ಶಿಕ್ಷಣ ಹಕ್ಕು ಕಾಯ್ದೆ)'ಯಷ್ಟು ಕ್ರಾಂತಿಕಾರಿಯಾಗಿರಲಿಲ್ಲ. ಅದರಲ್ಲೂ ಹೊಸ ಸಹಸ್ರಮಾನದಲ್ಲಿನ ಮೊದಲ ದಶಕದ ಕೊನೆಗೆ ಹೊಸ ನೀತಿ ನಿರೂಪಣೆಯ ಉಪಕ್ರಮಗಳ ಜೊತೆಗೆ ಹೊರಹೊಮ್ಮಿದ್ದು ಅದಾಗಲೇ ಉತ್ತಮಗೊಂಡಿದ್ದ ಸನ್ನಿವೇಶಕ್ಕೆ ಕಳಶಪ್ರಾಯವಾಗಿತ್ತು.

ಸರ್ವರಿಗೂ ಶಿಕ್ಷಣ ನೀಡುವುದಕ್ಕಾಗಿ ಏಪ್ರಿಲ್ 2000ರಂದು ಡಕಾರ್ ಶಿಕ್ಷಣ ವೇದಿಕೆಯಲ್ಲಿ ದೇಶಗಳು ತಮ್ಮ ಸಾಮೂಹಿಕ ಬದ್ಧತೆಯನ್ನು ವ್ಯಕ್ತಪಡಿಸಿದವು. ಇದರ ಆಧಾರದ ಮೇಲೆ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಡಕಾರ್ ಚೌಕಟ್ಟು (The Dakar Framework for Action) ರಚಿತವಾಯಿತು. ಸರಿಸುಮಾರು ಎರಡು ವರ್ಷಗಳ ನಂತರ, ಡಿಸೆಂಬರ್ 2002ರಲ್ಲಿ, ಭಾರತದ ಸಂಸತ್ತು ಸಂವಿಧಾನದ 86ನೇ ತಿದ್ದುಪಡಿ ಕಾಯ್ದೆಯನ್ನು ಅಂಗೀಕರಿಸಿತು. ಮೂಲಭೂತ ಹಕ್ಕುಗಳ ಪಟ್ಟಿಗೆ 'ಸರ್ಕಾರವು 6ರಿಂದ 14ರ ವರ್ಷದೊಳಗಿನ ಎಲ್ಲಾ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಕಾನೂನಿನ ರೀತ್ಯಾ ನಿರ್ಧಾರಿತವಾದ ರೀತಿಯಲ್ಲಿ ಒದಗಿಸಬೇಕು' ಎಂಬ ವಿಧಿ '21ಎ'ಯನ್ನು ಸೇರಿಸುವ ಮೂಲಕ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವಂತೆ ಇದು ಆಗ್ರಹಿಸಿತು.

ಹೀಗಾಗಿ, ಭಾರತದ ಸಂವಿಧಾನವು ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿಸಿತು. ಆದರೆ, ಪರಿಣಾಮರೂಪದ ಅನುಸರಣಾ ಶಾಸನವು (consequential legislation) ಮಾತ್ರ ಈ ಹಕ್ಕು ಯಾವ ರೀತಿಯದ್ದು ಎಂಬುದನ್ನು ನಿರ್ಧರಿಸುತ್ತದೆ ಎಂದು ವಿಧಿಸಿತು. ಇದನ್ನು, ಕೇಂದ್ರ ಸರ್ಕಾರ ನೇಮಿಸಿದ ಅಧಿಕೃತ ರಾಜ್ಯಪತ್ರದಲ್ಲಿರುವ (Official Gazette) ಅಧಿಸೂಚನೆಯ ಪ್ರಕಾರ ಇಂತಹ ದಿನಾಂಕದಂದು ಅನುಷ್ಠಾನಕ್ಕೆ ಬರಬೇಕೆಂದು ನಿಗದಿಪಡಿಸಲಾಯಿತು. ಭಾರತ ಸಂವಿಧಾನದ 2002ನೇ ತಿದ್ದುಪಡಿಯಲ್ಲಿ ಪ್ರಸ್ತಾಪಿಸಿರುವ ಅನುಸರಣಾ ಶಾಸನವಾದ, 'ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕಿನ ಕಾಯ್ದೆ 2009'ನ್ನು ಸಂಸತ್ತು ಆಗಸ್ಟ್ 2009ರಲ್ಲಿ ಅಂಗೀಕರಿಸಿತು; ಮಾತ್ರವಲ್ಲ, ಏಪ್ರಿಲ್ 2010ರಲ್ಲಿ ಅನುಷ್ಠಾನಗೊಳಿಸುವಂತೆ ಅಧಿಸೂಚನೆಯನ್ನು ಹೊರಡಿಸಿತು. ಈ ಕಾಯ್ದೆಯ ಆಧಾರದ ಮೇಲೆ ಕೇಂದ್ರವು, ರಾಜ್ಯಗಳಿಗೆ ಕಾಯ್ದೆಯನ್ನು ಅನುಷ್ಠಾನಗೊಳಿಸಲು ಮಾರ್ಗದರ್ಶನ ನೀಡುವುದಕ್ಕಾಗಿ ಅಧೀನ ಶಾಸನ ಹಾಗೂ ಮಾದರಿ ನಿಯಮಗಳನ್ನು ರೂಪಿಸಿತು.

ಕೆಲವು ಶಾಲೆಗಳು ಇದರ ಸಂವಿಧಾನಬದ್ಧತೆಯನ್ನು ಪ್ರಶ್ನಿಸಿದ್ದರಿಂದ ಈ ಪ್ರಗತಿಪರ ಕಾನೂನು ಒಡನೆಯೇ ಮೊಕದ್ದಮೆಗಳ ಸುಳಿಯಲ್ಲಿ ಸಿಲುಕಿಕೊಂಡಿತು. ಸರ್ವೋಚ್ಚ ನ್ಯಾಯಾಲಯವು ಇವುಗಳಲ್ಲಿ ಎರಡು ಪ್ರಕರಣಗಳನ್ನು ಎತ್ತಿಕೊಂಡು, ಕಾಯ್ದೆಯ ಪರವಾಗಿ ತೀರ್ಮಾನ ಕೊಟ್ಟದ್ದೇ ಅಲ್ಲದೆ ಅದರ ನ್ಯಾಯಸಮ್ಮತತೆಯನ್ನು ಒತ್ತಿಹೇಳುವ ಮೂಲಕ 2014ರ ಒಳಗೆ 'ಆರ್.ಟಿ.ಇ.'ಯನ್ನು ಅನುಷ್ಠಾನಗೊಳಿಸುವ ಹಾದಿಯನ್ನು ಸುಗಮಗೊಳಿಸಿತು. ಪ್ರಾಥಮಿಕ ಹಂತದ ಶಿಕ್ಷಣವನ್ನು ಪಡೆಯಲು ದೇಶದಲ್ಲಿರುವ ಪ್ರತಿಯೊಂದು ಮಗುವಿಗೂ ಹಕ್ಕು ಇದ್ದು, ಇದು ಮೂಲಭೂತವೂ, ಸಮರ್ಥನೀಯವೂ ಆದ್ದರಿಂದ ಈ ಹಕ್ಕು ದೊರಕುವಂತೆ ನೋಡಿಕೊಳ್ಳುವುದು ಆಡಳಿತದ ಜವಾಬ್ದಾರಿಯಾಗಿದೆ ಎಂದು ಸ್ಪಷ್ಟೀಕರಿಸಿತು.

‘ಆರ್.ಟಿ.ಇ.’ಯ ಸಂವಿಧಾನಾತ್ಮಕ ಉಪಬಂಧವಾದ ‘ಹಿಂದುಳಿದ ಮಕ್ಕಳಿಗೆ ಖಾಸಗಿ ಶಾಲೆಗಳಲ್ಲಿ ಸೀಟುಗಳ ಮೀಸಲಾತಿ’ಯ ಸಂಕುಚಿತ ದೃಷ್ಟಿಕೋನದ ಮೂಲಕ ಸಾಮಾನ್ಯ ಜನಮಾನಸವು ‘ಆರ್.ಟಿ.ಇ.’ಯನ್ನು ಕಾಣುತ್ತಿರುವುದು ದುರದೃಷ್ಟಕರ ವಿಷಯವಾಗಿದೆ. ಇದು ಕಾಯ್ದೆಯಲ್ಲಿರುವ ಒಂದು ಉಪ-ಷರತ್ತು ಮಾತ್ರ, ಏಳು ಅಧ್ಯಾಯಗಳಲ್ಲಿರುವ ಇದರ 38 ವಿಭಾಗಗಳು ಹಾಗೂ ಅನೇಕ ಉಪವಿಭಾಗಗಳು ಬಹಳಷ್ಟು ಮಂದಿಗೆ ಕಾಣುವುದೇ ಇಲ್ಲ. ಈ ಪ್ರಗತಿಪರ ಕಾನೂನು ನಮ್ಮ ಶಿಕ್ಷಣ ಕ್ಷೇತ್ರವನ್ನು ಕಲಿಕಾರ್ಥಿ-ಕೇಂದ್ರಿತವಾಗುವಂತಹ, ಮಕ್ಕಳು ಸ್ವಾಗತಿಸುವಂತಹ, ಹೊಸದಾದ ಹಾಗೂ ಉತ್ತಮ ಕಾರ್ಯನಿರ್ವಹಣೆಗೆ ಮಾದರಿಯಾಗುವಂತಹ ರೀತಿ ಮೇಲೆತ್ತುತ್ತದೆ. ಇದನ್ನು ಅದು ಜಾರಿಗೊಳಿಸುವ ರೀತಿ ಇಂತಿದೆ:

- ಮಕ್ಕಳ ಕಳಪೆ ಕಲಿಕೆಯ ಫಲಿತಾಂಶವನ್ನು ಆಧರಿಸಿ ಮುಂದಿನ ತರಗತಿಗೆ ಅವರು ಹೋಗದಂತೆ ತಡೆಯುವುದನ್ನು ನಿಷೇಧಿಸುವುದು ಹಾಗು ತನ್ಮೂಲಕ ಇದರ ಕಾರ್ಯಭಾರವನ್ನು ಹೊತ್ತ ವಯಸ್ಕರನ್ನು ಅದಕ್ಕೆ ಹೊಣೆಗಾರರಾಗಿ ಮಾಡುವುದು.
- ದೈಹಿಕ ಶಿಕ್ಷೆಯನ್ನು ನಿಷೇಧಿಸುವುದರ ಮೂಲಕ ಮಕ್ಕಳು ಇಷ್ಟಪಡುವಂತಹ ವಾತಾವರಣದ ನಿರ್ಮಾಣಕ್ಕೆ ನೆರವು ನೀಡುವುದು.
- ಪ್ರವೇಶ ಹಂತದಲ್ಲಿ ಕನಿಷ್ಠ ಮಟ್ಟದ ಶಿಕ್ಷಕರ ಅರ್ಹತೆಗಳನ್ನು ಕಡ್ಡಾಯಗೊಳಿಸುವುದರ ಮೂಲಕ ಶಾಲೆಗಳಲ್ಲಿ ಕಲಿಕಾ ಸಾಮರ್ಥ್ಯವನ್ನು ಹೆಚ್ಚಿಸುವುದು.

ಪೋಷಕರ ಸಮುದಾಯಗಳ ಪಾಲ್ಗೊಳ್ಳುವಿಕೆಯನ್ನು ಶಾಲೆಗಳಲ್ಲಿ ಸ್ಥಾಪಿಸುವುದರ ಜೊತೆಗೆ ಶಾಲೆಗಳಲ್ಲಿ ಇರಬೇಕಾದ ಗುಣಮಟ್ಟ ಹಾಗೂ ಮಾನದಂಡಗಳನ್ನು ಸ್ಥಾಪಿಸುವ ಏರ್ಪಾಡು, ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಶ್ರೀಮತಿ ಕ್ಯಾಥರಿನ್ ಟೊಮಾಸೆವಿಸ್ಕಿ (‘ಶಿಕ್ಷಣದ ಹಕ್ಕು’ ಬಗ್ಗೆಗಿನ ವಿಶ್ವಸಂಸ್ಥೆಯ ಮಾಜಿ ವಿಶೇಷ ಸಮನ್ವಯಕಾರ್ತಿ) ರಚಿಸಿರುವ 4 ‘ಎ’ಗಳ ಅಂಶಗಳ ಚೌಕಟ್ಟು ‘ಆರ್.ಟಿ.ಇ.’ಯನ್ನು ಅರ್ಥಮಾಡಿಕೊಳ್ಳಲು ಅತ್ಯುತ್ತಮ ಮಾರ್ಗವಾಗಿದೆ. ಈ ಪರಿಕಲ್ಪನೆಯು ಅಂತಾರಾಷ್ಟೀಯ ಸರ್ಕಾರೇತರ ಸಂಸ್ಥೆಯಾದ ‘ಆಕ್ಷನ್ ಏಡ್’ ನೀಡುವ ಮಾದರಿಯನ್ನು ಬಳಸಿಕೊಂಡು ಈ ಕಾನೂನನ್ನು ವಿವರಿಸುತ್ತದೆ. ಅದರ ಪ್ರಕಾರ, ಶಿಕ್ಷಣವು ಅರ್ಥಪೂರ್ಣ ಹಕ್ಕಾಗಿರಬೇಕೆಂದರೆ ಅದು ಲಭ್ಯವಿರಬೇಕು, ಕೈಗೆಟಕುವಂತಿರಬೇಕು, ಒಪ್ಪಿಗೆಯಾಗುವಂತಿರಬೇಕು ಹಾಗೂ ಹೊಂದಿಕೊಳ್ಳಬೇಕು (ಎವೇಲೇಬಲ್, ಆಕ್ಸೆಸಿಬಲ್, ಆಕ್ಸೆಪ್ಟೆಬಲ್ ಹಾಗೂ ಅಡಾಪ್ಟೆಬಲ್).

ಲಭ್ಯವಿರಬೇಕು: ಶಿಕ್ಷಣವನ್ನು ಉಚಿತವಾಗಿ ಸರ್ಕಾರದ ಹಣದಲ್ಲಿ ಒದಗಿಸಬೇಕು. ಅದರಲ್ಲಿ ತಕ್ಕಮಟ್ಟಿನ ಮೂಲಸೌಕರ್ಯಗಳು ಹಾಗೂ ಕಲಿಕೆಯನ್ನು ದಾಟಿಸುವಲ್ಲಿ ಬೆನ್ನೆಲುಬಾಗಿ ನಿಲ್ಲಬಲ್ಲ ತರಬೇತಿ ಪಡೆದ ಶಿಕ್ಷಕರು ಇರಬೇಕು.

ಕೈಗೆಟಕುವಂತಿರಬೇಕು: ಅದು ಎಲ್ಲರಿಗೂ ದೊರಕುವಂತಹ ತಾರತಮ್ಯರಹಿತ ವ್ಯವಸ್ಥೆಯಾಗಿದ್ದು, ಅತಿ ಹಿಂದುಳಿದವರನ್ನು ಮುಖ್ಯವಾಹಿನಿಗೆ ಸೇರಿಸಿಕೊಳ್ಳಲು ಸಕಾರಾತ್ಮಕ ಹೆಜ್ಜೆಗಳನ್ನು ಇಡಬೇಕು.

ಒಪ್ಪಿಗೆಯಾಗುವಂತಿರಬೇಕು: ಶಿಕ್ಷಣದ ವಿಷಯವು ಪ್ರಸ್ತುತವಾಗಿರಬೇಕು, ತಾರತಮ್ಯರಹಿತವಾಗಿರಬೇಕು, ಶಿಕ್ಷಣವು ಸಾಂಸ್ಕೃತಿಕ ಸೂಕ್ತತೆ ಮತ್ತು ಗುಣಮಟ್ಟವನ್ನು ಹೊಂದಿರಬೇಕು. ಜೊತೆಗೆ, ಶಾಲೆಯು ಸುರಕ್ಷಿತವಾಗಿರಬೇಕು ಹಾಗೂ ಶಿಕ್ಷಕರಲ್ಲಿ ವೃತ್ತಿಪರತೆ ಇರಬೇಕು.

ಹೊಂದಿಕೊಳ್ಳುವಂತಿರಬೇಕು: ಬದಲಾಗುತ್ತಿರುವ ಸಮಾಜದ ಅಗತ್ಯಗಳಿಗೆ ಅನುಗುಣವಾಗಿ ಶಿಕ್ಷಣವು ವಿಕಾಸಗೊಳ್ಳುವ ಸಾಮರ್ಥ್ಯ ಹೊಂದಿದ್ದು, ಲಿಂಗ ತಾರತಮ್ಯದಂತಹ ಅಸಮಾನತೆಗಳಿಗೆ ಸವಾಲೊಡ್ಡಲು ನೆರವಾಗುವಂತಿರಬೇಕು. ಹಾಗೂ ವಿಶಿಷ್ಟ ಸ್ಥಳೀಯ ಸಂದರ್ಭಗಳಿಗೆ ಹೊಂದಿಕೊಳ್ಳುವಂತಿರಬೇಕು.

ಶಿಕ್ಷಣ ಹಕ್ಕಿನ ಕುರಿತಾದ ಈ ವಿವರಣೆಯು ಶಿಕ್ಷಣಕ್ಷೇತ್ರವನ್ನು ಸಂಪೂರ್ಣವಾಗಿ ಹೊಸ ಆಯಾಮದೆಡೆಗೆ ಎತ್ತಿದ್ದಲ್ಲದೆ ಹಕ್ಕು-ಆಧಾರಿತ ಮಾರ್ಗವನ್ನು ಜನಕ್ಕೆ ಪರಿಚಯಿಸಿತು. ಆರ್.ಟಿ.ಇ. ಕುರಿತಾದ ಈ ವಿವರಣೆ ನಮ್ಮ ದೇಶಕ್ಕೆ ಒಂದು ಹೊಸ ಮಾರ್ಗವನ್ನೇ ತೋರಿಸಿಕೊಟ್ಟಿತು. ಆದರೂ, ಇದು ರಾತ್ರೋರಾತ್ರಿ ಸಂಭವಿಸಲಿಲ್ಲ, ಅದಕ್ಕೆ ಒಂದು ಕುತೂಹಲಕಾರಿಯಾದ ಚರಿತ್ರೆ ಇದೆ.

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಬಳಿಕ ಹೊಸದಾಗಿ ರೂಪುಗೊಂಡ ಸಂವಿಧಾನದ 45ನೇ ವಿಧಿ ಹೀಗೆ ಹೇಳುತ್ತದೆ: 'ಸಂವಿಧಾನವು ಜಾರಿಗೆ ಬಂದು ಹತ್ತು ವರ್ಷಗಳ ಒಳಗಾಗಿ, ರಾಜ್ಯಾಡಳಿತವು ಎಲ್ಲಾ ಮಕ್ಕಳಿಗೂ, ಅವರು 14 ವರ್ಷ ವಯಸ್ಸು ತಲುಪವವರೆಗೂ, ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒದಗಿಸಲು ಶ್ರಮಿಸಬೇಕು.' ಆದರೆ, 1968ರ ರಾಷ್ಟ್ರೀಯ ಶಿಕ್ಷಣನೀತಿಯು ಪ್ರಾಥಮಿಕ ಶಿಕ್ಷಣದೆಡೆಗಿನ ಭಾರತ ಸರ್ಕಾರದ ಬದ್ಧತೆಯನ್ನು ದೃಢೀಕರಿಸಿದ ಮೊದಲ ಅಧಿಕೃತ ದಸ್ತಾವೇಜು ಎನಿಸಿತು. 1986ರ ರಾಷ್ಟ್ರೀಯ ಶಿಕ್ಷಣ ನೀತಿಯು ಆ ಬದ್ಧತೆಗೆ ಹೆಚ್ಚಿನ ಪ್ರಾಧಾನ್ಯ ನೀಡಿತು. ಇಷ್ಟೆಲ್ಲ ಇದ್ದರೂ, ಮೊಟ್ಟಮೊದಲಿಗೆ ಶಿಕ್ಷಣದ ಹಕ್ಕನ್ನು ಸಂವಿಧಾನದ ಮೂಲಭೂತ ಹಕ್ಕನ್ನಾಗಿ ಸೇರಿಸಬೇಕು ಎಂದು ಶಿಫಾರಸ್ಸು ಮಾಡಿದ್ದು 1990ರಲ್ಲಿ ಆದ ಈ ಶಿಕ್ಷಣನೀತಿಯ ಪುನರ್ಪರಿಶೀಲನೆ. ಇದರ ಆಧಾರದ ಮೇಲೆ 1992ರ ರಾಷ್ಟ್ರೀಯ ಶಿಕ್ಷಣನೀತಿಯನ್ನು ರಚಿಸಲಾಯಿತು. ಏತನ್ಮಧ್ಯೆ ಜಾಮ್ಟೀನ್ ಘೋಷಣೆ (Jomtiem Declaration) ಜಾರಿಯಾಗಿತ್ತು (1992) ಹಾಗೂ ಭಾರತವು ವಿಶ್ವಸಂಸ್ಥೆಯ ಮಕ್ಕಳ ಹಕ್ಕಿಗೆ ಸಂಬಂಧಿಸಿದ ಒಪ್ಪಂದಕ್ಕೆ (UN Convention on the Rights of the Child -CRC)) ಸಹಿ ಹಾಕುವ ಮೂಲಕ ಶಿಕ್ಷಣವನ್ನು ಮಕ್ಕಳ ಮೂಲಭೂತ ಹಕ್ಕನ್ನಾಗಿ ಅಳವಡಿಸಿಕೊಳ್ಳುವ ಶಾಸನ ರಚನೆಯ ಪ್ರಕ್ರಿಯೆಯನ್ನು ಪ್ರಾರಂಭಿಸಿತು. ಇದಕ್ಕೆ ಮೊದಲೇ 1976ರಲ್ಲಿ ಸಂವಿಧಾನಕ್ಕೆ ತಂದ ತಿದ್ದುಪಡಿಯು ಅದುವರೆಗೂ ಶಾಲಾ ಶಿಕ್ಷಣಕ್ಕೆ ಸಂಬಂಧಪಟ್ಟ ಶಾಸನಗಳನ್ನು ಜಾರಿಗೊಳಿಸುವ ಅಧಿಕಾರ ಹೊಂದಿದ್ದ ರಾಜ್ಯ ಸರ್ಕಾರಗಳ ಕಪಿಮುಷ್ಟಿಯಿಂದ ಇದನ್ನು ಕೇಂದ್ರ ಸರ್ಕಾರಕ್ಕೆ ವರ್ಗಾಯಿಸಿತ್ತು. ಈ ತಿದ್ದುಪಡಿಯು ಶಾಲಾಶಿಕ್ಷಣಕ್ಕಾಗಿ ಶಾಸನವನ್ನು ಜಾರಿಮಾಡಲು ಕೇಂದ್ರ ಸರ್ಕಾರಕ್ಕೆ ಶಕ್ತಿ ತುಂಬಿತು. ಈ ಎಲ್ಲ ಬೆಳವಣಿಗೆಗಳ ಜೊತೆಗೆ 1990ರ ದಶಕದ ಆರಂಭದಲ್ಲಿ ಸುಪ್ರೀಂ ಕೋರ್ಟ್ ಎರಡು ತೀರ್ಪುಗಳನ್ನು ನೀಡಿ, ಶಿಕ್ಷಣದ

ಹಕ್ಕು ಸಂವಿಧಾನದ ಭಾಗ 3ರ ಅಡಿಯಲ್ಲಿ ಪ್ರತಿಷ್ಠಾಪಿಸಲಾದ ಮೂಲಭೂತ ಹಕ್ಕುಗಳಿಗೆ ಸಹಗಾಮಿಯಾಗಿರುತ್ತದೆ. ಹಾಗೂ ಶಿಕ್ಷಣವನ್ನು ಪಡೆಯಲು ಪ್ರತಿಯೊಬ್ಬ ಪ್ರಜೆಗೂ ಇರುವ ಹಕ್ಕನ್ನು ಸಂವಿಧಾನವು ಎತ್ತಿಹಿಡಿಯುತ್ತದೆ; ಅಲ್ಲದೆ ಶಿಕ್ಷಣದ ಹಕ್ಕನ್ನು ಮೂಲಭೂತ ಹಕ್ಕು ಎಂಬಂತೆ ಪ್ರಕಟವಾಗಿ ವ್ಯಕ್ತವಾಗದಿದ್ದರೂ, ಅದು ಸೂಚ್ಯವಾಗಿದ್ದು, ವಿಧಿ 21ರ ಅಡಿಯಲ್ಲಿ ಖಾತರಿಪಡಿಸಿರುವ ಜೀವನದ ಹಕ್ಕಿನ ಅಂಗವಾಗಿದೆ ಮತ್ತು ಇದನ್ನು ಸಂವಿಧಾನದ ನಿರ್ದೇಶಕ ತತ್ವಗಳಿಗೆ ಅನುಗುಣವಾಗಿ ಅರ್ಥೈಸಬೇಕು ಎಂದು ತಿಳಿಸಿತು.

ಹೀಗಾಗಿ, ವಿಧಿ 45 ಹಾಗೂ 41ರ ಸಂದರ್ಭದಲ್ಲಿ, ಶಿಕ್ಷಣದ ಹಕ್ಕನ್ನು ಹೀಗೆ ಅರ್ಥೈಸಿಕೊಳ್ಳಲಾಗಿದೆ: 'ದೇಶದ ಪ್ರತಿಯೊಂದು ಮಗುವು ಹದಿನಾಲ್ಕರ ವಯಸ್ಸನ್ನು ತಲುಪುವವರೆಗೂ ಉಚಿತ ಶಿಕ್ಷಣವನ್ನು ಪಡೆಯುವ ಹಕ್ಕು ಹೊಂದಿರುತ್ತದೆ.' 'ಆರ್.ಟಿ.ಇ'ಯನ್ನು ಮಕ್ಕಳ ಹಕ್ಕುಗಳಂತೆ ಹಾಗೂ ಈ ಹಕ್ಕುಗಳು ಖಚಿತವಾಗಿ ಮಕ್ಕಳಿಗೆ ತಲುಪುವಂತೆ ನೋಡಿಕೊಳ್ಳಲು ಇರುವ ಸಾಂಸ್ಥಿಕ ವ್ಯವಸ್ಥೆಗಳ ದೃಷ್ಟಿಕೋನದಿಂದ ಕಾಣುವ ಅಗತ್ಯ ಇದೆ.

ಕುತೂಹಲಕರ ವಿಚಾರವೆಂದರೆ, 'ಆರ್.ಟಿ.ಇ.'ಗೆ ಸರ್ವೋಚ್ಚ ನ್ಯಾಯಾಲಯದಿಂದ ಹಸಿರು ನಿಶಾನೆ 2013ರಲ್ಲಿ ಸಿಗುವ ವೇಳೆಗಾಗಲೇ ರಾಷ್ಟ್ರೀಯ ಮಕ್ಕಳ ನೀತಿಯನ್ನು (National Policy for Children -NPC) ಅಳವಡಿಸಿಕೊಳ್ಳಲಾಗಿತ್ತು. 'ಆರ್.ಟಿ.ಇ.'ಯನ್ನು ಅರ್ಥೈಸಿಕೊಳ್ಳಲು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವಾಲಯದಿಂದ ಪ್ರಸ್ತುತಪಡಿಸಲಾದ ನೀತಿಯು ಇನ್ನೂ ಹೆಚ್ಚು ಸ್ಪಷ್ಟತೆ ನೀಡಿತು. ಈ ನೀತಿಯ ಪ್ರಸ್ತಾವನೆಯು ಹದಿನೆಂಟು ವರ್ಷ ವಯಸ್ಸಿಗಿಂತ ಕೆಳಗೆ ಇರುವವರನ್ನು ಮಕ್ಕಳು ಎಂದು ವ್ಯಾಖ್ಯಾನಿಸುವುದೇ ಅಲ್ಲದೆ, ಬಾಲ್ಯ ಎಂಬುದು ತನ್ನದೇ ಸ್ವಂತ ಮೌಲ್ಯ ಹೊಂದಿರುವ ಬದುಕಿನ ಒಂದು ಅವಿಭಾಜ್ಯ ಅಂಗ ಎಂದು ಹೇಳುತ್ತದೆ. ಮಕ್ಕಳು ವಿಭಿನ್ನರಾಗಿದ್ದು, ಅವರ ವಿಭಿನ್ನ ಅಗತ್ಯಗಳಿಗೆ ತಕ್ಕಂತೆ ವಿಭಿನ್ನ ಪ್ರತಿಸ್ಪಂದನೆಗಳ ಅವಶ್ಯಕತೆ ಇರುವುದರಿಂದ ಹಾಗೂ ಮಕ್ಕಳನ್ನು ಏಕರೂಪದ ಗುಂಪಿನಂತೆ ಪರಿಗಣಿಸಲು ಅಸಾಧ್ಯವಾದುದರಿಂದ ಮಕ್ಕಳ ರಕ್ಷಣೆಗೆ ಹಾಗೂ ಅವರ ಸಮಗ್ರ ಮತ್ತು ಸಾಮರಸ್ಯಪೂರ್ಣ ಬೆಳವಣಿಗೆಗಾಗಿ, ದೀರ್ಘಕಾಲಿಕ, ಸತತ, ಬಹು–ಕ್ಷೇತ್ರೀಯ, ಸಂಘಟಿತ ಹಾಗೂ ಎಲ್ಲರನ್ನೂ ಒಳಪಡಿಸಿಕೊಳ್ಳುವ ವಿಧಾನಗಳ ಅವಶ್ಯಕತೆಯಿದೆ ಎಂದು ಇದು ಹೇಳುತ್ತದೆ. ಈ ನೀತಿಯು, ಮುಂದುವರಿದು, ಮಕ್ಕಳ ಅಸ್ತಿತ್ವ, ಆರೋಗ್ಯ, ಪೌಷ್ಟಿಕತೆ, ಬೆಳವಣಿಗೆ, ಶಿಕ್ಷಣ, ರಕ್ಷಣೆ ಹಾಗೂ ಪಾಲ್ಗೊಳ್ಳುವಿಕೆಗಳನ್ನು ಪ್ರತಿ ಮಗುವಿನ ನಿರಾಕರಿಸಲಾಗದ ಹಕ್ಕು ಎಂದು ಗುರುತಿಸುತ್ತದೆ. ಜೊತೆಗೆ, ಮಕ್ಕಳ ಮೇಲೆ ಪರಿಣಾಮ ಬೀರುವ ಎಲ್ಲಾ ಕಾನೂನುಗಳಿಗೆ, ನೀತಿಗಳಿಗೆ, ಯೋಜನೆಗಳಿಗೆ ಹಾಗೂ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಸೂಕ್ತ ಮಾಹಿತಿ ಮತ್ತು ಮಾರ್ಗದರ್ಶನ ನೀಡಲು ಅಪೇಕ್ಷಿಸುತ್ತದೆ. ದೇಶ, ರಾಜ್ಯ ಹಾಗೂ ಸ್ಥಳೀಯ ಆಡಳಿತಗಳು ಹಮ್ಮಿಕೊಳ್ಳುವ ಯಾವುದೇ ಕ್ಷೇತ್ರದ ಎಲ್ಲಾ ಉಪಕ್ರಮಗಳು ಮತ್ತು ಕಾರ್ಯಗಳು ಈ ನೀತಿಯ ತತ್ವಗಳನ್ನು ಗೌರವಿಸಿ ಎತ್ತಿಹಿಡಿಯಲೇಬೇಕು ಎಂದು ಹೇಳುತ್ತದೆ.

ರಾಷ್ಟ್ರೀಯ ಮಕ್ಕಳ ನೀತಿಯು ಮತ್ತೊಂದು ಪ್ರಗತಿಪರ ನೀತಿ, ಇದು ಮಕ್ಕಳ ಹಕ್ಕನ್ನು ಭದ್ರಪಡಿಸುವ ನಿಟ್ಟಿನಲ್ಲಿ ಆಡಳಿತಯಂತ್ರದ ಪಾತ್ರವನ್ನು ತೋರುವುದರ ಜೊತೆಗೆ ಸರ್ಕಾರೇತರ ಭಾಗೀದಾರರ ಸಕ್ರಿಯ

ತೊಡಗಿಸಿಕೊಳ್ಳುವಿಕೆ, ಪಾಲ್ಗೊಳ್ಳುವಿಕೆ ಹಾಗು ಈ ಭಾಗೀದಾರರ ಸಾಮೂಹಿಕ ಕಾರ್ಯಾಚರಣೆಗಳನ್ನು ಪ್ರೋತ್ಸಾಹಿಸುವ ಮೂಲಕ ಸರ್ಕಾರೇತರ ಸಂಸ್ಥೆಗಳ ಪಾತ್ರವನ್ನು ಗುರತಿಸಿದ್ದೇ ಅಲ್ಲದೆ, ಅವುಗಳಿಗೊಂದು ಪಾತ್ರವನ್ನು ಕಲ್ಪಿಸಿಕೊಟ್ಟಿತು. ಹಕ್ಕುಗಳಾಧಾರಿತ ವಿಧಾನವನ್ನು ಅನುಸರಿಸಲು ವಿಭಿನ್ನ ಕ್ಷೇತ್ರ ಹಾಗೂ ಪರಿಸರಗಳ ನಡುವೆ ಪ್ರಜ್ಞಾಪೂರ್ವಕವಾದ, ಏಕಮುಖವಾದ ಹಾಗೂ ಸಹಭಾಗಿ ಸಂಪರ್ಕಗಳು ಅನಿವಾರ್ಯವೆಂದು ಹೇಳುತ್ತಾ, ಎಲ್ಲಾ ಹಂತಗಳಲ್ಲೂ ಹೊಂದಾಣಿಕೆಯಿರಬೇಕು ಎಂಬುದನ್ನು ಈ ನೀತಿಯು ಒತ್ತಿ ಹೇಳುತ್ತದೆ. ಸಹಸ್ರಮಾನದ ತಿರುವಿನಲ್ಲಿ ಈ ದೇಶದ ವಿವಿಧ ಕ್ಷೇತ್ರಗಳಲ್ಲಿ ಹಾಗೂ ವಿವಿಧ ನೀತಿ ನಿರೂಪಣಾ ಉಪಕ್ರಮಗಳಲ್ಲಿ ಕಂಡುಬಂದ ಏಕಮುಖತೆಯೇ ಈ ಕಾರ್ಯಕ್ರಮ ಸರಣಿಯ ವಿಶೇಷತೆಯಾಗಿದೆ. ವಿಭಿನ್ನ ಕ್ಷೇತ್ರಗಳ ಉಪಕ್ರಮಗಳು ನಮ್ಮ ಸಂವಿಧಾನದ ಮೂಲಭೂತ ತತ್ವಗಳನ್ನು ಆಧಾರವಾಗಿ ಬಳಸಿಕೊಂಡು ಈ ರೀತಿಯಾಗಿ ಗಹನವಾದ ಪರಸ್ಪರ ಸಂಪರ್ಕ ಹೊಂದಿರುವುದನ್ನು ಇಲ್ಲಿಯವರೆಗೂ ದೇಶ ಕಂಡಿರಲಿಲ್ಲ.

**ಮುಕ್ತಾಯ: ಉತ್ತಮ ಭವಿಷ್ಯದ ಆಶಯ**

ಈ ಲೇಖನವು ಹೊಸ ಸಹಸ್ರಮಾನದಲ್ಲಿ ಹೊರಹೊಮ್ಮಿದ ನೀತಿ ಉಪಕ್ರಮಗಳ ಸರಣಿಯಲ್ಲಿ ಕೆಲವನ್ನು ಮಾತ್ರ ಸ್ಪರ್ಶಿಸಿದೆ. ಆದರೂ, ಹಲವು ವರ್ಷಗಳ ಹೋರಾಟದ ಬಳಿಕ ಈಗಿರುವ ಸನ್ನಿವೇಶಕ್ಕೆ ನಾವು ತಲುಪಿದ ದಾರಿಯು ಹೇಗಿತ್ತು ಎಂಬುದರ ಸೂಚನೆಯನ್ನು ಕೊಡುವಲ್ಲಿ ಸಫಲವಾಗಿದೆ. ಈಗ ಕಾರ್ಯಗತವಾಗುತ್ತಿರುವ ಹಲವಾರು ತಳಮಟ್ಟದ ವಿಚಾರಗಳನ್ನು ಏಳು ದಶಕಗಳ ಹಿಂದೆಯೇ ನಮ್ಮ ಸಂವಿಧಾನವು ನಿರ್ದೇಶಿಸಿತ್ತು. ಇದು ನಮ್ಮ ಸಂವಿಧಾನ ರಚನೆಕಾರರ ಪ್ರಗತಿಪರ ಚಿಂತನೆ ಹಾಗೂ ದೂರದೃಷ್ಟಿಗಳನ್ನು ಎತ್ತಿ ತೋರಿಸುತ್ತದೆ. ಮಾನವ ಹಕ್ಕಿನ ವಿಚಾರದಲ್ಲಿ ಸಂಭವಿಸಿದ ಅಂತಾರಾಷ್ಟ್ರೀಯ ಬೆಳವಣಿಗೆಗಳು ಹಾಗೂ ನಮ್ಮ ಸ್ವಂತ ರಾಜಕೀಯ ಮತ್ತು ನ್ಯಾಯಾಂಗಗಳಲ್ಲಿನ ಬೆಳವಣಿಗೆಗಳು ಸೇರಿದಂತೆ ಜೊತೆ ಸೇರಿದ ವಿವಿಧ ವಿದ್ಯಮಾನಗಳ ಕಾರಣದಿಂದ ಹಾಗೂ 'ಸಹಸ್ರಮಾನದ ತಿರುವಿ'ನಂತಹ ಮಹಾನ್ ಘಟನೆಯು ಮತ್ತಷ್ಟು ಶಕ್ತಿ ನೀಡಿದ್ದರಿಂದ ಯೋಜನೆಗಳು ಕಾರ್ಯರೂಪಕ್ಕೆ ಇಳಿಯುವುದನ್ನು ಕಾಣುವ ಕಾಲಘಟ್ಟಕ್ಕೆ ನಾವು ತಲುಪಲು ಸಾಧ್ಯವಾಯಿತು; ಕಾಣ್ಕೆಯಾಗಿ ತೋರಿದುದು ಸನ್ನಿವೇಶಗಳ ಒತ್ತಾಸೆಯಿಂದ ಮೈದಳೆಯುವಂತಾಯಿತು. ರಾಜಕೀಯ ಆಸರೆ ಹಾಗೂ ನ್ಯಾಯಾಂಗದ ಕ್ರಿಯಾಶೀಲತೆ ಜೊತೆಗೂಡಿದ ನಿಮಿತ್ತ ನೀತಿನಿರೂಪಣೆಗಳು ಕಾರ್ಯಕ್ರಮಗಳ ರೂಪವನ್ನು ಪಡೆದು ವಾಸ್ತವರೂಪಕ್ಕೆ ಬಂದವು.

ಈ ಉಪಕ್ರಮಗಳ ಮೂಲಕ ಭವಿಷ್ಯವನ್ನು, ಅದರಲ್ಲೂ ವಿಶೇಷವಾಗಿ ನಮ್ಮ ಮಕ್ಕಳ ಭವಿಷ್ಯವನ್ನು, ಸಂವಿಧಾನದ ತತ್ವಗಳ ಸದೃಢ ಆಧಾರದ ಮೇಲೆ ಕಟ್ಟಲಾಗಿದೆ. ಇದರಿಂದ ನಾವು ಭವಿಷ್ಯದೆಡೆಗೆ ಆಶಾದಾಯಕ ದೃಷ್ಟಿ ಬೀರಬಹುದಾಗಿದೆಯಲ್ಲದೆ, ಈ ನೀತಿ ಉಪಕ್ರಮಗಳ ಭದ್ರ ಬುನಾದಿಯನ್ನು ಬಳಸಿ ಉತ್ತಮತರ ಸಮಾಜವನ್ನು ಕಟ್ಟುವ ದಿಕ್ಕಿನಲ್ಲಿ ಎಲ್ಲಾ ಭಾಗೀದಾರರು, ನಾಗರಿಕರೂ ಸೇರಿದಂತೆ ರಾಜ್ಯಾಡಳಿತಗಳು ಶ್ರಮಿಸುತ್ತವೆ ಎಂದು ನಿರೀಕ್ಷಿಸಬಹುದಾಗಿದೆ. ಆದ್ದರಿಂದ, ಮಕ್ಕಳನ್ನು ಅದೇ ತರಗತಿಯಲ್ಲಿ ಉಳಿಸಿಕೊಳ್ಳಬಾರದು ಎಂಬ ನೀತಿಯನ್ನು

ಹಿಂಪಡೆಯಲು ಇಡುವ ಬೇಡಿಕೆಯನ್ನು ಕಂಡಾಗ ಅಥವಾ ನಿರಂತರ ಮತ್ತು ಸಮಗ್ರ ಮೌಲ್ಯಮಾಪನದ (Continuous and Comprehensive Evaluation- CCE) ರೂಪದಲ್ಲಿರುವ ಪ್ರಗತಿಪರ ಮೌಲ್ಯಮಾಪನ ಸುಧಾರಣೆಯನ್ನು ತೊಡೆದುಹಾಕುವ ಪ್ರಯತ್ನವನ್ನು ನೋಡಿದಾಗ ತೀವ್ರ ಕಳವಳವಾಗುತ್ತದೆ. ಇಲ್ಲಿರುವ ಕೆಲವು ಪ್ರಗತಿಪರ ಉಪಕ್ರಮಗಳು ಕಾರ್ಯನಿರ್ವಹಣೆಯಲ್ಲಿ ಎಡವಿದರೆ ಅದನ್ನು ತ್ಯಜಿಸುವುದರ ಬದಲು (ಹಾಗೇನಾದರೂ ತ್ಯಜಿಸಲು ಮುಂದಾದರೆ, ಕೆಟ್ಟದ್ದನ್ನು ತೊರೆಯುವ ಉತ್ಸಾಹದಲ್ಲಿ ಒಳ್ಳೆಯದನ್ನೂ ಕಳೆದುಕೊಳ್ಳುವ ಅಪಾಯವಿರುತ್ತದೆ) ಇನ್ನೂ ಉತ್ತಮವಾಗಿ ಅನುಷ್ಠಾನಗೊಳಿಸುವ ಕಡೆಗೆ ನಾವು ಕಾರ್ಯತತ್ಪರರಾಗಬೇಕು. ಹಾಗಾಗಿ, ನಾವು ಎಚ್ಚರದಿಂದ ಇರಬೇಕಾಗುತ್ತದೆ. ಹಲವು ಬಾರಿ ಆಗುವಂತೆ, ಸಂಕುಚಿತ ಸಿದ್ಧಾಂತಗಳ ಅಥವಾ ಪ್ರಸ್ತುತದ ಜನಮೆಚ್ಚುವ ಬೇಡಿಕೆಗಳ ಪ್ರಭಾವಕ್ಕೆ ಒಳಗಾಗಿ ಪ್ರಗತಿಪರ ಉಪಕ್ರಮಗಳನ್ನು ಕೆಡವಲಾಗದು. ಹೀಗೇನಾದರೂ ಆದರೆ, ‘ಒಂದು ಹೆಜ್ಜೆ ಮುಂದೆ; ಎರಡು ಹೆಜ್ಜೆ ಹಿಂದೆ’ ಎಂಬ ರೋಗಗ್ರಸ್ತ ಸ್ಥಿತಿಯನ್ನು ತಲುಪಿ, ಅದು ನಮ್ಮ ಪ್ರಗತಿಯನ್ನು ತಪ್ಪದೇ ಬಾಧಿಸಲು ಅವಕಾಶ ಮಾಡಿಕೊಟ್ಟಂತೆ ಆಗುತ್ತದೆ.

ಇಂದು ನಮ್ಮ ನೀತಿ–ನಿರೂಪಣೆಗಳು ಸಮರ್ಪಕವಾಗಿವೆ, ಅದಕ್ಕೆ ಅನುಸಾರವಾದ ಕಾರ್ಯಕ್ರಮಗಳೂ ಸುಮಾರು ಒಂದೂವರೆ ದಶಕದಿಂದ ಜಾರಿಗೊಳ್ಳುತ್ತಿವೆ, ಒಂದೆರಡು ಬಾರಿ ಆಡಳಿತ ಪಕ್ಷದ ಬದಲಾವಣೆ ನಡೆದರೂ ಇದೆಲ್ಲ ಸಾಧ್ಯವಾಗಿದೆ. ಇದರ ಪರಿಣಾಮವಾಗಿ ಶಿಕ್ಷಣರಂಗದಲ್ಲಿ ಮಹತ್ವದ ಬದಲಾವಣೆಗಳು ಸಂಭವಿಸಿವೆ. ಆದ್ದರಿಂದ ಈಗ ಕಟ್ಟಿರುವುದನ್ನು ಕೆಡವದೆ, ಅದರ ಮೇಲೆಯೇ ಹೊಸ ರಚನೆಯನ್ನು ನಿರ್ಮಿಸುತ್ತ ಪ್ರಗತಿಯೆಡೆಗೆ ಸಾಗೋಣ.

........................................ಮುಕ್ತಾಯ……………………………

**ಲೇಖಕರ ಪರಿಚಯ:** ರಿಷಿಕೇಶ್ ಅವರು ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಪಾಲಿಸಿ ಅಂಡ್ ಗವರ್ನೆನ್ಸ್ ನಲ್ಲಿ ಸಹಾಯಕ ಪ್ರಾಧ್ಯಾಪಕರಾಗಿದ್ದಾರೆ. ವಿಶ್ವವಿದ್ಯಾಲಯದ ಶಿಕ್ಷಣ, ಕಾನೂನು ಹಾಗೂ ನೀತಿಗಳ ಹಬ್‌ನ ಮುಖ್ಯಸ್ಥರೂ ಆಗಿದ್ದಾರೆ. ಶಿಕ್ಷಣದ ಮೌಲ್ಯಮಾಪನ ಹಾಗೂ ಶಿಕ್ಷಕರ ತರಬೇತಿ ಅವರ ಸಂಶೋಧನಾಸಕ್ತಿಯ ವಿಷಯಗಳು. ಅವರು ಶೈಕ್ಷಣಿಕ ನೀತಿಗೆ ಸಂಬಂಧಿಸಿದ ಪ್ರಸಕ್ತ ವಿದ್ಯಮಾನಗಳ ಬಗ್ಗೆ ಆಳವಾದ ಆಸಕ್ತಿ ಹೊಂದಿದ್ದಾರೆ. ಅವರನ್ನುrishikesh@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ : ಕುಶಾಲ್ ಬಿ.ಎಸ್
ಪರಿಶೀಲನೆ : ಜಿ.ಕೆ.ಮಧ್ಯಸ್ಥ